# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 101 (29) |
| ಸದಸ್ಯರ ಹೆಸರು | : | ಶ್ರೀ ಎನ್. ರವಿಕುಮಾರ್ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 13.09.2021 |
| ಉತ್ತರಿಸುವವರು | : | ಅರಣ್ಯ, ಆಹಾರ ಹಾಗೂ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಅ) | ಅರಣ್ಯದಿಂದ ಮರಗಳನ್ನು ಅನುಮತಿ ಇಲ್ಲದೆ ಕಡಿದ ಆರೋಪದಲ್ಲಿ ಇದುವರೆಗೆ ಎಷ್ಟು ಜನರ ಮೇಲೆ ಅರಣ್ಯ ಇಲಾಖೆ ವತಿಯಿಂದ ಕೇಸು ದಾಖಲಾಗಿದೆ; | 2018-19 ರಿಂದ 2021-22ನೇ ಸಾಲಿನವರೆಗೆ ಅಕ್ರಮವಾಗಿ ಅರಣ್ಯ ಪ್ರದೇಶದಲ್ಲಿ ಮರಕಡಿತಲೆ ಆರೋಪದಡಿ ದಾಖಲಿಸಿರುವ ಪ್ರಕರಣಗಳ ವೃತ್ತಾವಾರು ವಿವರ ಈ ಕೆಳಗಿನಂತಿವೆ. |

| ಕ್ರ.ಸಂ. | ಅರಣ್ಯ ವೃತ್ತದ/ ಘಟಕದ ಹೆಸರು | ಆರೋಪಿತರ ಸಂಖ್ಯೆ |
|---|---|---|
| 1 | ಹಾಸನ | 148 |
| 2 | ಶಿವಮೊಗ್ಗ | 1614 |
| 3 | ಎಫ್‌ಡಿಟಿಪಿ ಮೈಸೂರು | 01 |
| 4 | ಮಂಗಳೂರು | 821 |
| 5 | ಮೈಸೂರು | 48 |
| 6 | ಚಿಕ್ಕಮಗಳೂರು | 514 |
| 7 | ಕೆನರಾ | 1387 |
| 8 | ಧಾರವಾಡ | 412 |
| 9 | ಕಲಬುರ್ಗಿ | 17 |
| 10 | ಚಾಮರಾಜನಗರ | 15 |
| 11 | ಬೆಳಗಾವಿ | 281 |
| 12 | ಕೊಡಗು | 168 |
| 13 | ಬಳ್ಳಾರಿ | 182 |
| 14 | ಅಪ್ರಮುಅಸಂ (ಜಾಗೃತ) | 316 |
| 15 | ಬೆಂಗಳೂರು | 340 |
| | ಒಟ್ಟು | 6264 |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| (ಆ) | ಕಾಡಿನಿಂದ ಕದ್ದು ಸಾಗಿಸಿದ ಮರಗಳನ್ನು ದಿಮ್ಮಿಗಳನ್ನಾಗಿ ಪರಿವರ್ತಿಸಿದ ಎಷ್ಟು ಮರದ ಮಿಲ್ಲುಗಳ ಮೇಲೆ ಕೇಸು ದಾಖಲಾಗಿದೆ; ಎಷ್ಟು ಮೊತ್ತದ ಮರದ ದಿಮ್ಮಿಗಳನ್ನು ಅರಣ್ಯ ಇಲಾಖೆ ವಶಪಡಿಸಿಕೊಂಡಿದೆ; (ಜಿಲ್ಲಾವಾರು ಮಾಹಿತಿ ನೀಡುವುದು) | ಕಾಡಿನಿಂದ ಕದ್ದು ಸಾಗಿಸಿದ ಮರಗಳನ್ನು ದಿಮ್ಮಿಗಳನ್ನಾಗಿ ಪರಿವರ್ತಿಸಿದ ಮರದ ಮಿಲ್ಲುಗಳ ಮೇಲೆ ಕೇಸ್ ದಾಖಲಿಸಿದ ವಿವರ ಈ ಕೆಳಗಿನಂತಿವೆ. |

| ಕ್ರ.ಸಂ. | ಜಿಲ್ಲೆಯ ಹೆಸರು | ಮರದ ಮಿಲ್ಲುಗಳ ಸಂಖ್ಯೆ | ಮರದ ದಿಮ್ಮಿಯ ಮೌಲ್ಯ (ರೂ.ಗಳಲ್ಲಿ) |
|---|---|---|---|
| 1 | ಉಡುಪಿ | 03 | 47,776/- |
| 2 | ದಕ್ಷಿಣ ಕನ್ನಡ | 01 | 19,556/- |
| 3 | ಕೊಡಗು | 01 | 28,000/- (ಅಂದಾಜು) |
| 4 | ರಾಮನಗರ | 01 | 15,000/- |

<table>
<tr><td>(ಇ)</td><td>ದಕ್ಷಿಣ ಕನ್ನಡ ಜಿಲ್ಲೆಯ ಆಶಾ ವುಡ್ ವರ್ಕ್ಸ್, 5ನೇ ಬ್ಲಾಕ್ ಕೃಷ್ಣಾಪುರ, ಸುರತ್ಕಲ್ ಈ ಮರದ ಮಿಲ್ಲಿನಲ್ಲಿ ಅಕ್ರಮವಾಗಿ ಕಾಡಿನಿಂದ ತಂದ ಮರಗಳನ್ನು ದಿಮ್ಮಿಗಳನ್ನಾಗಿ ತುಂಡರಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಸದರಿ ಮರದ ಮಿಲ್ಲಿನ ಮೇಲೆ ಅರಣ್ಯ ಇಲಾಖೆ ವತಿಯಿಂದ ದಾಖಲಾಗಿರುವ ಕೇಸುಗಳ ಸಂಖ್ಯೆ ಎಷ್ಟು: (3 ವರ್ಷಗಳ ಮಾಹಿತಿ ನೀಡುವುದು)</td><td>ಸದರಿ ಮಿಲ್ಲು 1985-86ನೇ ಸಾಲಿನಿಂದ ಕಾರ್ಯಾಚರಿಸುತ್ತಿದ್ದು, ಸದರಿ ಮರದ ಮಿಲ್ಲಿನಲ್ಲಿ ಅಕ್ರಮವಾಗಿ ಕಾಡಿನಿಂದ ತಂದ ಮರದ ದಿಮ್ಮಿಗಳನ್ನು ತುಂಡರಿಸುತ್ತಿರುವುದು ಕಂಡು ಬಂದಿರುವುದಿಲ್ಲ. ಅಲ್ಲದೇ, ಸದರಿ ಮಿಲ್ಲಿನ ವಿರುದ್ಧ ಮೂರು (3) ವರ್ಷಗಳಲ್ಲಿ ಯಾವುದೇ ರೀತಿಯ ಅರಣ್ಯ ತಕ್ಕೀರು ದಾಖಲಾಗಿರುವುದಿಲ್ಲ .</td></tr>
<tr><td>(ಈ)</td><td>ವಸತಿ ಪ್ರದೇಶದಲ್ಲಿ ಮರದ ಮಿಲ್ಲುಗಳನ್ನು ನಡೆಸಲು ಅನುಮತಿ ನೀಡಲಾಗಿದೆಯೇ: ಹಾಗಿದ್ದಲ್ಲಿ, ಅನುಮತಿಸಲು ಇರುವ ನಿಯಮಗಳೇನು: ಇದುವರೆಗೆ ವಸತಿ ಪ್ರದೇಶದಲ್ಲಿರುವ ಎಷ್ಟು ಮರದ ಮಿಲ್ಲುಗಳನ್ನು ಮುಚ್ಚಲಾಗಿದೆ:</td><td>ಕರ್ನಾಟಕ ಅರಣ್ಯ ನಿಯಮಾವಳಿ, 1969ರ ನಿಯಮ 163(2) (ಎ) ರನ್ವಯ ಯಾವುದೇ ಕಾಯ್ದಿರಿಸಿದ ಅರಣ್ಯ, ಸಂರಕ್ಷಿತ ಅರಣ್ಯ ಅಥವಾ ಜಿಲ್ಲಾ ಅರಣ್ಯದ ಪರಿಮಿತಿಯಿಂದ ಹತ್ತು ಕಿಲೋ ಮೀಟರುಗಳ ವಾಯವೀಯ ದೂರವಿದ್ದಲ್ಲಿ ಮಾತ್ರ (ಮುನ್ಸಿಪಲ್ ಪ್ರದೇಶ ಹಾಗೂ ಕೈಗಾರಿಕಾ ಪ್ರದೇಶಗಳನ್ನು ಹೊರತುಪಡಿಸಿ, ಮುನ್ಸಿಪಲ್ ವತಿಯಿಂದ ನಿರಾಕ್ಷೇಪಣಾ ಪತ್ರದ ಆಧಾರದ ಮೇಲೆ) ಹಾಗೂ ಯಾವುದೇ ಶೈಕ್ಷಣಿಕ ಸಂಸ್ಥೆ ಅಥವಾ ಆಸ್ಪತ್ರೆಯಿಂದ 250 ಮೀಟರ್‌ಗಳ ದೂರವಿದ್ದಲ್ಲಿ ಮಾತ್ರ ಪರವಾನಗಿ ಪಡೆದಿರುವ ಸಾಮಿಲ್ಲುಗಳನ್ನು ಸ್ಥಾಪಿಸಲು ಅವಕಾಶವಿರುತ್ತದೆ.<br><br>ಮೇಲ್ಕಂಡ ನಿಯಮಗಳ ಹೊರತು, ವಸತಿ ಪ್ರದೇಶ ಅಥವಾ ಇತರೆ ಪ್ರದೇಶಗಳಲ್ಲಿ ಸಾಮಿಲ್ ನಡೆಸಲು ಅವಕಾಶ ಇಲ್ಲದೇ ಇರುವುದರಿಂದ, ಸಾಮಿಲ್ಲುಗಳನ್ನು ಮುಚ್ಚುವ ಪ್ರಶ್ನೆ ಉದ್ಭವಿಸುವುದಿಲ್ಲ.</td></tr>
<tr><td>(ಉ)</td><td>ಕಳೆದ ಎರಡು ವರ್ಷಗಳಲ್ಲಿ ಹೊಸದಾಗಿ ಎಷ್ಟು ಮರದ ಮಿಲ್ಲುಗಳನ್ನು ತೆರೆಯಲು ಅನುಮತಿಸಲಾಗಿದೆ? (ಜಿಲ್ಲಾವಾರು ವಿವರ ನೀಡುವುದು)</td><td>ರಾಜ್ಯದಲ್ಲಿ ಕಳೆದ ಎರಡು ವರ್ಷಗಳಲ್ಲಿ ಹೊಸದಾಗಿ ಮರದ ಮಿಲ್ಲುಗಳನ್ನು ತೆರೆಯಲು ಅನುಮತಿ ನೀಡಿರುವ ವಿವರ ಈ ಕೆಳಕಂಡಂತಿದೆ.<br><br><table><tr><th>ವರ್ಷ</th><th>ಅನುಮತಿ ನೀಡಿದ ಸಾಮಿಲ್‌ಗಳ ಸಂಖ್ಯೆ</th><th>ಷರಾ</th></tr><tr><td>2019-20</td><td>-</td><td>-</td></tr><tr><td>2020-21</td><td>02</td><td>ಆಮದು ಮಾಡಿಕೊಂಡ ಮರಗಳನ್ನು (Imported Wood) ಮಾತ್ರ ಬಳಸುವ ಷರತ್ತಿಗೆ ಒಳಪಟ್ಟು ದಿನಾಂಕ 09.03.2021 ರಂದು ಜರುಗಿದ ರಾಜ್ಯ ಮಟ್ಟದ ಸಮಿತಿ ಸಭೆಯಲ್ಲಿ ಅನುಮತಿ ನೀಡಲಾಗಿದೆ.</td></tr></table></td></tr>
</table>

ಸಂಖ್ಯೆ: ಅಪಜೀ 113 ಎಫ್‌ಎಫ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ ಮತ್ತು ನಾಗರೀಕ ಸರಬರಾಜು
ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು